# ಕರ್ನಾಟಕ ವಿಧಾನಸಭೆ

ಹದಿನಾಲ್ಕನೇ ವಿಧಾನಸಭೆ
(ನಾಲ್ಕನೇ ಅಧಿವೇಶನ)

## ಕಾರ್ಯಕಲಾಪಗಳ ಪಟ್ಟಿ

ಗುರುವಾರ, ದಿನಾಂಕ 03ನೇ ಜುಲೈ, 2014
(ಸಮಯ: ಬೆಳಗ್ಗೆ 11.00 ಗಂಟೆಗೆ)

-----

### 1. ವಿತ್ತೀಯ ಕಾರ್ಯಕಲಾಪಗಳು

ಅ) 2014-15ನೇ ಸಾಲಿನ ಈ ಕೆಳಕಂಡ ಅನುದಾನ ಬೇಡಿಕೆಯ ಮೇಲೆ ಸರ್ಕಾರದ ಉತ್ತರ ಮತ್ತು ಮತಕ್ಕೆ ಹಾಕುವುದು.

| ಬೇಡಿಕೆ ಸಂಖ್ಯೆ | ಬೇಡಿಕೆಯ ಹೆಸರು |
|---|---|
| 07 | ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ |

ಆ) 2014-15ನೇ ಸಾಲಿನ ಈ ಕೆಳಕಂಡ ಅನುದಾನ ಬೇಡಿಕೆಯ ಮಂಡನೆ ಹಾಗೂ ಚರ್ಚೆ.

| ಬೇಡಿಕೆ ಸಂಖ್ಯೆ | ಬೇಡಿಕೆಯ ಹೆಸರು |
|---|---|
| 14 | ಕಂದಾಯ |

### 2. ಪ್ರಶ್ನೋತ್ತರ

| | | |
|---|---|---|
| ಅ) ಸದನದಲ್ಲಿ ಉತ್ತರಿಸುವ ಪ್ರಶ್ನೆಗಳು | : | ಒಂಭತ್ತನೇ ಪಟ್ಟಿ |
| ಆ) ದಿನಾಂಕ 26.06.2014ರ ನಾಲ್ಕನೇ ಪಟ್ಟಿಯಿಂದ ತಡೆಹಿಡಿಯಲಾದ ಶ್ರೀ ಕೆ.ಜಿ. ಬೋಪಯ್ಯ ಅವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 50(29) | : | ಸಮಾಜ ಕಲ್ಯಾಣ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು |
| ಇ) ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆಗಳು | : | ಒಂಭತ್ತನೇ ಪಟ್ಟಿ |

ಪು.ತಿ.ನೋ.,

## 3. ಶಾಸನ ರಚನೆ

**ವಿಧೇಯಕಗಳನ್ನು ಮಂಡಿಸುವುದು.**

**ಕರ್ನಾಟಕ ಕೆರೆ ಅಭಿವೃದ್ಧಿ ಪ್ರಾಧಿಕಾರ ವಿಧೇಯಕ, 2014**
**ಶ್ರೀ ಶಿವರಾಜ್ ಎಸ್ ತಂಗಡಗಿ (ಸಣ್ಣ ನೀರಾವರಿ ಸಚಿವರು) ಅವರು:-**

ಅ) 2014ನೇ ಸಾಲಿನ ಕರ್ನಾಟಕ ಕೆರೆ ಅಭಿವೃದ್ಧಿ ಪ್ರಾಧಿಕಾರ ವಿಧೇಯಕವನ್ನು ಮಂಡಿಸಲು ಅನುಮತಿ ಕೋರುವುದು;
ಆ) ಹಾಗೂ ವಿಧೇಯಕವನ್ನು ಮಂಡಿಸುವುದು.

## 4. ಗಮನ ಸೆಳೆಯುವ ಸೂಚನೆಗಳು

1. ಶ್ರೀ ಎ.ಬಿ. ರಮೇಶ ಬಂಡಿಸಿದ್ದೇಗೌಡ ಅವರು ಶ್ರೀರಂಗನಾಥ ಸ್ವಾಮಿ ದೇವಾಲಯದಲ್ಲಿ ಮೂಲಭೂತ ಸೌಕರ್ಯದ ಕೊರತೆ ಮತ್ತು ದೇವಾಲಯದ ರಾಜಗೋಪುರ ಕಳಶಗಳು ಕಳಚಿಬಿದ್ದಿರುವ ಹಾಗೂ ಭಕ್ತಾದಿಗಳಿಂದ ಅನಧಿಕೃತವಾಗಿ ವಾಹನ ಶುಲ್ಕವನ್ನು ವಸೂಲು ಮಾಡುತ್ತಿರುವ ಬಗ್ಗೆ ಮಾನ್ಯ ಮುಖ್ಯಮಂತ್ರಿಯವರ ಗಮನ ಸೆಳೆಯುವುದು.

2. ಶ್ರೀ ಜಿ.ಹೆಚ್. ಶ್ರೀನಿವಾಸ್ ಅವರು ತರಿಕೆರೆ ಪಟ್ಟಣದ ಪ್ರಥಮ ದರ್ಜೆ ಕಾಲೇಜಿನ ಕಟ್ಟಡ ಕಾಮಗಾರಿ ಪ್ರಾರಂಭಿಸಲು ಅರಣ್ಯ ಇಲಾಖೆಯ ವ್ಯಾಪ್ತಿಯಲ್ಲಿರುವ ಕಂದಾಯ ಜಮೀನನ್ನು ನೀಡುವ ಬಗ್ಗೆ ಮಾನ್ಯ ಅರಣ್ಯ ಸಚಿವರ ಗಮನ ಸೆಳೆಯುವುದು.

3. ಶ್ರೀ ಕೆ.ಜಿ. ಬೋಪಯ್ಯ ಅವರು ಸರ್ಕಾರಿ (ಕಂದಾಯ) ಜಮೀನಿನಲ್ಲಿ ವಾಸವಿರುವವರಿಗೆ ನಿವೇಶನದ ಹಕ್ಕುಪತ್ರ ನೀಡಲು ಭೂಕಂದಾಯ ಕಾಯ್ದೆ 94(ಸಿ)(11) ರಂತೆ ಅರ್ಜಿ ಸಲ್ಲಿಸಲು ಕಾಲಾವಕಾಶ ನೀಡುವ ಬಗ್ಗೆ ಮಾನ್ಯ ಕಂದಾಯ ಸಚಿವರ ಗಮನ ಸೆಳೆಯುವುದು.

4. ಶ್ರೀ ಹೆಚ್.ಸಿ. ಬಾಲಕೃಷ್ಣ ಅವರು ಹೊಸಕೋಟೆ ತಾಲ್ಲೂಕು, ನಂದಗುಡಿ ಹೋಬಳಿ, ಚೊಕ್ಕಸಂದ್ರ ಗ್ರಾಮದ ಸರ್ವೆ ನಂಬರ್ 77ರ ಸರ್ಕಾರಿ ಗೋಮಾಳದಲ್ಲಿ ಹಲವಾರು ರೈತರುಗಳಿಗೆ ಜಮೀನುಗಳನ್ನು ಮಂಜೂರು ಮಾಡಿದ್ದರೂ ಸಹ ಸದರಿ ಮೂಲ ದಾಖಲೆಗಳನ್ನು ತಿದ್ದಿ ನಕಲಿ ದಾಖಲೆಗಳನ್ನು ಸೃಷ್ಠಿಸಿ ಮೂಲ ಮಂಜೂರುದಾರರಿಗೆ ಅನ್ಯಾಯವಾಗಿರುವ ಬಗ್ಗೆ ಮಾನ್ಯ ಕಂದಾಯ ಸಚಿವರ ಗಮನ ಸೆಳೆಯುವುದು.

5. ಶ್ರೀ ಬಿ.ಬಿ. ನಿಂಗಯ್ಯ ಅವರು ಮೂಡಿಗೆರೆ ತಾಲ್ಲೂಕಿನ ಕುದುರೆಮುಖ ಕಬ್ಬಿಣದ ಅದಿರು ಸಂಸ್ಥೆ ವತಿಯಿಂದ ನಡೆಸುತ್ತಿದ್ದ ಕೇಂದ್ರೀಯ ವಿದ್ಯಾಲಯವನ್ನು ಆರ್ಥಿಕ ವರ್ಷದಿಂದ ನಡೆಸಲು ಸಾಧ್ಯವಾಗುವುದಿಲ್ಲವೆಂದು ಆದೇಶಿಸಿ ಕಾರ್ಯಚಟುವಟಿಕೆಗಳನ್ನು ನಿಲ್ಲಿಸಿರುವುದರಿಂದ ವಿದ್ಯಾರ್ಥಿಗಳಿಗೆ ತೊಂದರೆಯಾಗಿರುವ ಬಗ್ಗೆ ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರ ಗಮನ ಸೆಳೆಯುವುದು.

**ಮು.ತಿ.ನೋ.,**

6. ಶ್ರೀ ಸಿ.ಟಿ. ರವಿ ಅವರು 2008-09ರಲ್ಲಿ ಮಂಜೂರಾದ ಬೆಳವಾಡಿ ದೊಡ್ಡಕೆರೆಯಿಂದ ಕಳಸಾಪುರ-ದೇವನೂರು ಹಾಗೂ ಇತರೆ ಗ್ರಾಮಗಳಿಗೆ ನೀರುಣಿಸುವ ಕಾಮಗಾರಿಯು ಸ್ಥಗಿತಗೊಂಡಿರುವ ಬಗ್ಗೆ ಮಾನ್ಯ ಸಣ್ಣ ನೀರಾವರಿ ಸಚಿವರ ಗಮನ ಸೆಳೆಯುವುದು.

7. ಶ್ರೀ ಹೆಚ್.ಕೆ. ಕುಮಾರಸ್ವಾಮಿ ಅವರು ಎತ್ತಿನಹೊಳೆ ಯೋಜನೆ ಮಂಜೂರಾಗಿದ್ದರೂ ಸಕಲೇಶಪುರ ತಾಲ್ಲೂಕಿನಲ್ಲಿ ಭೂಸ್ವಾಧೀನ ಪ್ರಕ್ರಿಯೆ ಪ್ರಾರಂಭವಾಗದಿರುವ ಬಗ್ಗೆ ಮಾನ್ಯ ಭಾರೀ ಮತ್ತು ಮಧ್ಯಮ ನೀರಾವರಿ ಸಚಿವರ ಗಮನ ಸೆಳೆಯುವುದು.

8. ಶ್ರೀ ಹೆಚ್.ಡಿ. ರೇವಣ್ಣ ಅವರು ಹಾಸನ ಚೆಸ್ಕಾಂ ಆರ್.ಎಸ್.ಡಿ. 1 ಉಪವಿಭಾಗ ಮತ್ತು ಆರ್.ಎಸ್.ಡಿ. 2 ಉಪವಿಭಾಗಗಳಲ್ಲಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ಗಳು ವಿದ್ಯುತ್ ಪರಿವರ್ತಕಗಳನ್ನು ಬದಲಾಯಿಸಲು ರೈತರಿಂದ ಹೆಚ್ಚು ಹಣ ವಸೂಲಿ ಮಾಡುತ್ತಿರುವ ಬಗ್ಗೆ ಮಾನ್ಯ ಇಂಧನ ಸಚಿವರ ಗಮನ ಸೆಳೆಯುವುದು.

9. ಶ್ರೀ ವೈ. ಎನ್. ರುದ್ರೇಶಗೌಡ ಅವರು ಬೇಲೂರು ತಾಲ್ಲೂಕಿನ ಬರಪೀಡಿತ ಪ್ರದೇಶಗಳಾದ ಮಾದೀಹಳ್ಳಿ ಹೋಬಳಿ, ಹಳೇಬೀಡು ಹೋಬಳಿಯಲ್ಲಿ ಕುಡಿಯುವ ನೀರಿಗಾಗಿ ಯಗಚಿ ಏತ ನೀರಾವರಿ ಯೋಜನೆಯು ಪೂರ್ಣಗೊಳ್ಳದಿರುವುದರಿಂದ ರೈತರಿಗೆ ತೊಂದರೆಯುಂಟಾಗುತ್ತಿರುವ ಬಗ್ಗೆ ಮಾನ್ಯ ಭಾರೀ ಮತ್ತು ಮಧ್ಯಮ ನೀರಾವರಿ ಸಚಿವರ ಗಮನ ಸೆಳೆಯುವುದು.

10. ಶ್ರೀ ತನ್ವೀರ್‌ಸೇಠ್ ಅವರು ರೋಣ ತಾಲ್ಲೂಕಿನ ವಸತಿ ನಿಲಯಗಳಲ್ಲಿ ಸರಿಯಾದ ನೀರಿನ ವ್ಯವಸ್ಥೆ ಇಲ್ಲದಿರುವ ಬಗ್ಗೆ ಹಾಗೂ ಕಳಪೆ ಗುಣಮಟ್ಟದ ಆಹಾರ ಸೇವನೆಯಿಂದ ಮೂರು ವಿದ್ಯಾರ್ಥಿಗಳು ಆಸ್ಪತ್ರೆಗೆ ದಾಖಲಾಗಿರುವ ಬಗ್ಗೆ ಸಮಾಜ ಕಲ್ಯಾಣ ಹಾಗೂ ಹಿಂದುಳಿದ ವರ್ಗಗಳ ಸಚಿವರ ಗಮನ ಸೆಳೆಯುವುದು.

**ಪಿ.ಓಂಪ್ರಕಾಶ**
ಕಾರ್ಯದರ್ಶಿ

Raj N

ವಿಧಾನಸಭೆಯ ಕಾರ್ಯಕಲಾಪಗಳ ಪಟ್ಟಿಯನ್ನು ವೆಬ್‌ಸೈಟ್‌ನಲ್ಲಿಯೂ ಸಹ ಪಡೆದುಕೊಳ್ಳಬಹುದು.
(www.kar.nic.in/kla)